RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಮೇ ೨, ೨೦೧೩ (ವೈಶಾಖ ೧೨, ಶಕ ವರ್ಷ ೧೯೩೫)<br>**Bangalore, Thursday, May 2, 2013 ( Vaishakha 12, Shaka Varsha 1935)** | ಸಂಚಿಕೆ ೧೮<br>**Issue 18** |
|---|---|---|

## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಛ ನ್ಯಾಯಾಲಯವು ಮಾಡಿದ ನಿಯಮಗಳು

### ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 134 ವೆಚ್ಚ – 12/13 ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2013**

ಗ್ಲೋಬಲ್ ಸೈನ್ಸ್ ಗ್ಯಾಲರಿಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಲು ಶಕ್ಯತಾ ವರದಿ ತಯಾರಿಕೆಯನ್ನು (feasibility study) ರೂ.24.00 ಲಕ್ಷಗಳ ವೆಚ್ಚದಲ್ಲಿ (excluding taxes and out of pocket expenses) ಮೆ॥ ಪ್ರೈಸ್‌ವಾಟರ್‌ಹೌಸ್‌ಕೂಪರ್ಸ್ (M/s.Price water house coopers) ಇವರಿಂದ ಹಾಗೂ ಕನ್ಸೂಮರ್ ರಿಸರ್ಚ್ ಕಾರ್ಯವನ್ನು ರೂ.3.00 ಲಕ್ಷಗಳ ವೆಚ್ಚದಲ್ಲಿ (plus Rs.75,000/-out of pocket expenses) ಮೆ॥ ನೇಲ್‌ಸನ್ ಇಂಡಿಯನ್ ಪ್ರೈವೇಟ್ ಲಿಮಿಟೆಡ್ (M/s.Nielsen Indian Pvt. Ltd.) ಇವರಿಂದ ನೇರವಾಗಿ ಕೈಗೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ – 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಚಲಾಯಿಸಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯು ಧೃಡಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 118**
**SC - 25**

### ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 205 ಮೈಅಪ್ರಾ 2012, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2013.**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ (1987ರ ಕರ್ನಾಟಕ ಅಧಿನಿಯಮ ಸಂಖ್ಯೆ:34) 71ನೇ ಪ್ರಕರಣ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಿವೇಶನ ಹಂಚಿಕೆ) ನಿಯಮಗಳು 1991ರ ನಿಯಮ 12(2)ನ್ನು ಈ ಕೆಳಗಿನಂತೆ ತಿದ್ದುಪಡಿ ಮಾಡಿ ರಚಿಸಲಾಗಿದೆ.

"No person shall be eligible for allotment of the site, If such person has been allotted a site or a house in any part of the state by any other Urban Development Authority Or Karnataka Housing Board Or any other Agency of Government Or any Private layout formed by Housing Co-Operative Societies".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 177**
**SC - 100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 17 ಶಿಸನೇ 2013, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ 2013.**

ಅಧಿಸೂಚನೆ ಸಂಖ್ಯೆ: ಸಿಆಸುಇ 17 ಶಿಸನೇ 2013, ದಿನಾಂಕ: 05–02–2013 ರ ಪಟ್ಟಿಯಲ್ಲಿನ ಕ್ರಮ ಸಂಖ್ಯೆ: 30ರಲ್ಲಿರುವ ಶ್ರೀ ಗಿರಿಗೌಡ, ಇವರ ಹೆಸರಿನ ಕೆಳಗಿರುವ **"ನೀರಾವರಿ ಯೋಜನಾ ವಲಯ ಕಾಡಾ, ಶಿವಮೊಗ್ಗ"** ಎಂಬುದರ ಬದಲಾಗಿ **"ನೀರಾವರಿ ಯೋಜನಾ ವಲಯ ಕಾಡಾ, ತುಂಗಭದ್ರಾ"** ಎಂದು ಓದಿಕೊಳ್ಳತಕ್ಕದ್ದು.

**ಎಸ್. ನಾಗರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

**P.R. 180**
**SC - 100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 17 ಶಿಸನೇ 2013, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ 2013.**

ಅಧಿಸೂಚನೆ ಸಂಖ್ಯೆ: ಸಿಆಸುಇ 17 ಶಿಸನೇ 2013, ದಿನಾಂಕ: 05–02–2013 ರ ಪಟ್ಟಿಯಲ್ಲಿನ ಕ್ರಮ ಸಂಖ್ಯೆ: 14ರಲ್ಲಿರುವ ಶ್ರೀ **ಕೆ.ವಿ.ನಾಗೇಂದ್ರ,** ಇವರ ಹೆಸರಿನ ಕೆಳಗಿರುವ **"ಅಧ್ಯಕ್ಷರು, ಕರ್ನಾಟಕ ಪ್ರವಾಸೋದ್ಯಮ ನಿಗಮ"** ಎಂಬುದರ ಬದಲಾಗಿ **"ಅಧ್ಯಕ್ಷರು, ಕರ್ನಾಟಕ ಪರಿಶಿಷ್ಟ ಪಂಗಡ ಅಭಿವೃದ್ಧಿ ನಿಗಮ"** ಎಂದು ಓದಿಕೊಳ್ಳತಕ್ಕದ್ದು.

**ಎಸ್. ನಾಗರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

**P.R. 181**
**SC - 100**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 16 ಕಾಬಾಸೇ 2013(2), ಬೆಂಗಳೂರು, ದಿನಾಂಕ: 30ನೇ ಮಾರ್ಚ್, 2013.**

**ವಿಷಯ:** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರ ಪತ್ರದ ದಿನಾಂಕ: 8–2–2013ರ ಪ್ರಸ್ತಾವನೆಯಲ್ಲಿ ನಮೂದಿಸಿರುವ ಕ್ರಮ ಸಂಖ್ಯೆ 1,2,3 ಮತ್ತು 4ರಲ್ಲಿನ ಇಲಾಖೆಯ ಗ್ರೂಪ್ "ಎ" ದರ್ಜೆಯ ಹಿರಿಯ ಮತ್ತು ಕಿರಿಯ ಹುದ್ದೆಗಳ ಪ್ರತಿ ಕ್ಷೇತ್ರಾಧಿಕಾರಿಗಳಿಗೆ ವಾಹನಭತ್ಯದ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಾಇ 16 ಕಾಬಾಸೇ 2013, ದಿನಾಂಕ: 30–3–2013(1).
2. ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ರವರ ಪ್ರಸ್ತಾವನೆ ಸಂ.ಕಾಬಾನಿ/ಇಎಸ್‌ಟಿ–1/ಇತರೆ/ಸಿಆರ್–128/2012–2013, ದಿನಾಂಕ: 8–2–2013

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿನ ಕೋಷ್ಟಕದಲ್ಲಿ ನಮೂದಿಸಿರುವ ಕ್ರಮ ಸಂಖ್ಯೆ 1,2,3 ಮತ್ತು 4 ರಲ್ಲಿನ ಹುದ್ದೆಗಳಲ್ಲಿ ಕ್ಷೇತ್ರಾಧಿಕಾರಿಗಳಿಗೆ ಬಾಡಿಗೆ ಆಧಾರದ ಮೇಲೆ ವಾಹನ ಒದಗಿಸಲು ವಾಹನ ಭತ್ಯೆ ತಿಂಗಳಿಗೆ ರೂ30,000/–ರಂತೆ ಮಂಜೂರು ಮಾಡಿ ದಿನಾಂಕ:1–4–2013ರಿಂದ ಜಾರಿಗೆ ಬರುವಂತೆ ಮುಂಗಡಕ್ಕೆ ತಾತ್ವಿಕವಾಗಿ ಒಪ್ಪಿಗೆ ನೀಡಿ ಆದೇಶ ಹೊರಡಿಸಿದೆ.

ಈ ಸಂಬಂಧವಾಗಿ, ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012, ದಿನಾಂಕ: 27–04–2012 ರನ್ವಯ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಿರುವ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, 2013–2014 ನೇ ಸಾಲಿಗೆ ಸಂಬಂಧಿಸಿದಂತೆ ವಾಹನ ಭತ್ಯದ ಮುಂಗಡಕ್ಕೆ ಬೇಕಾದ ಅನುದಾನವನ್ನು ಪರಿಹಾರಾತ್ಮಕ ವೆಚ್ಚ (ಲೆಕ್ಕ ಶೀರ್ಷಿಕೆ 2230–01–102–0–060) ರಡಿಯಲ್ಲಿ ಭರಿಸಬಹುದಾಗಿದೆ. ಮೇಲೆ ತಿಳಿಸಲಾದ ಹುದ್ದೆಗಳ ಕ್ಷೇತ್ರಾಧಿಕಾರಿಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ನಿಗದಿಪಡಿಸಿದ ಮಾರ್ಗಸೂಚನೆಗಳನ್ವಯ ಬಾಡಿಗೆ ಆಧಾರದ ಮೇಲೆ ವಾಹನಗಳನ್ನು ಪಡೆದು ಉಪಯೋಗಿಸಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಶಿವರಾಮಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರ್ಖಾನೆಗಳು ಮತ್ತು ಬಾಯ್ಲರುಗಳು).

**P.R. 210**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 133 ಎಲ್‌ಜಿಎ 2012 ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್, 2012.**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964, ಸಬ್ ಸೆಕ್ಷನ್ (1) 94–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕು, ಬಗರ್ ಹುಕುಂ** ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ರಚಿಸಲಾಗಿದೆ.

| ಕ್ರಮ ಸಂಖ್ಯೆ | ಸದಸ್ಯರು | ಪ್ರವರ್ಗ |
|---|---|---|
| 1 | ಮಾನ್ಯ ಶಾಸಕರು, ಬಂಟ್ವಾಳ ವಿಧಾನಸಭಾ ಕ್ಷೇತ್ರ. | ಅಧ್ಯಕ್ಷರು |
| 2 | ಶ್ರೀ ರಾಮದಾಸ್ ಬಂಟ್ವಾಳ 'ಗುಲಾಬಿ ನಿವಾಸ ', ಬೈಪಾಸ್ ರಸ್ತೆ ಬಳಿ, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ. | ಸದಸ್ಯರು (ಸಾಮಾನ್ಯ) |
| 3 | ಶ್ರೀಮತಿ ಶಾಂತ ಚೌಟ ಕೋಂ ಸಂದೇಶ್, ಕುಮ್ಡೆಲು ಮನೆ, ಪುದು ಗ್ರಾಮ & ಅಂಚೆ, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ. | ಸದಸ್ಯರು (ಮಹಿಳೆ) |
| 4 | ಶ್ರೀ ಕೃಷ್ಣ ನ್ಯಾಕ ಎ., ಅಗರ್ತ ಬೈಲು ಅಂಚೆ, ಪೆರ್ನೆ ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ. | ಸದಸ್ಯರು (ಪರಿಶಿಷ್ಟ ಜಾತಿ) |
| 5 | ತಹಶೀಲ್ದಾರ್, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಶಿವಲಿಂಗಯ್ಯ,**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2)

P.R. 211
SC - 25

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಮಾತಂಇ 51 ಡಿಐಎಸ್ 2012[ಪಿ] ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್, 2012.**

ಶ್ರೀ ಸಚ್ಚಿದಾನಂದ ಮೂರ್ತಿ, ಸಮೃದ್ಧಿ ನಿಲಯ, ಎಸ್.ಆರ್.ಲೇಔಟ್, 9ನೇಕ್ರಾಸ್, ಕೇಂಬ್ರಿಡ್ಜ್ ಕಾಲೇಜ್ ಎದುರು, ಕೆ.ಆರ್.ಪುರಂ, ಬೆಂಗಳೂರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧ್ಯಕ್ಷರು, ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ, ಹುದ್ದೆಗೆ ಶ್ರೀ ಯಂಗಾರೆಡ್ಡಿ, ಇವರ ಬದಲಿಗೆ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ರಾಮಕೃಷ್ಣಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

P.R. 212

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 49 ಶಿಸನೇ 2013, ಬೆಂಗಳೂರು, ದಿನಾಂಕ: 13ನೇ ಮಾರ್ಚ್, 2013.**

ಡಾ॥ ಬಿ.ಟಿ, ರುದ್ರೇಶ್, ಅಧ್ಯಕ್ಷರು, ಕರ್ನಾಟಕ ಹೋಮಿಯೋಪತಿ ಮಂಡಳಿ, ಬೆಂಗಳೂರು ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ರಾಜ್ಯ ಸಚಿವ ಸ್ಥಾನಮಾನವನ್ನು ನೀಡಲಾಗಿದೆ.

**ಎಸ್. ನಾಗರಾಜಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

P.R. 214
SC - 100

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 139 ಶಿಸನೇ 2012, ಬೆಂಗಳೂರು, ದಿನಾಂಕ: 07ನೇ ಸೆಪ್ಟೆಂಬರ್, 2013.**

ಶ್ರೀಮತಿ.ಸಿ.ಮಂಜುಳ, ಕರ್ನಾಟಕ ರಾಜ್ಯ ಮಹಿಳಾ ಆಯೋಗದ ಅಧ್ಯಕ್ಷರು, ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 134 ಶಿಸನೇ 2010 ದಿನಾಂಕ 12–1–2011ರಲ್ಲಿ ರಾಜ್ಯ ಸಚಿವ ಸ್ಥಾನಮಾನ ನೀಡಿರುವುದನ್ನು ಮಾರ್ಪಡಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಂಪುಟ ದರ್ಜೆ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

P.R. 215
SC - 100

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 165 ಶಿಸನೇ 2012, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್, 2012.**

ಅಧಿಸೂಚನೆ ಸಂಖ್ಯೆ ಸಿಆಸುಇ 603 ಸೇಅಸೆ 2012, ದಿನಾಂಕ: 29–09–2012ರಲ್ಲಿ ಶ್ರೀ ಡಾ॥ ಎನ್.ಪ್ರಭುದೇವ್, ಕುಲಪತಿಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಇವರನ್ನು ಕರ್ನಾಟಕ ಆರೋಗ್ಯ ವ್ಯವಸ್ಥೆ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಿದ್ದು, ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಸಂಪುಟ ದರ್ಜೆಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

P.R. 216
SC - 100

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 37 ಶಿಸನೇ 2013, ಬೆಂಗಳೂರು, ದಿನಾಂಕ: 14ನೇ ಮಾರ್ಚ್, 2013.**

ಶ್ರೀ ಆರ್.ಅಬ್ದುಲ್ ರಿಯಾಜ್ ಖಾನ್, ಅಧ್ಯಕ್ಷರು ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಬೆಂಗಳೂರು ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ರಾಜ್ಯ ಸಚಿವ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

P.R. 217
SC - 100

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಅಪಜೀ 33 ಎಫ್‌ಪಿಸಿ 2013, ಬೆಂಗಳೂರು, ದಿನಾಂಕ: 05ನೇ ಮಾರ್ಚ್, 2013.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 08 ಎಸ್.ಎಫ್.ಪಿ. 2013 ದಿನಾಂಕ: 01–02–2013ರಲ್ಲಿ ಶ್ರೀ ನಾಗರಾಜ್, ಭಾ.ಅ.ಸೇ., ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಇವರನ್ನು ಕರ್ನಾಟಕ ಗೇರು ಅಭಿವೃದ್ಧಿ ನಿಗಮ ನಿಯಮಿತ, ಮಂಗಳೂರು ಇವರ ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನೇಮಕ ಮಾಡಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 05 ಎಸ್ಎಫ್‌ಪಿ 2013, ದಿನಾಂಕ: 13–02–2013ರಲ್ಲಿ ಶ್ರೀ ಬಿ.ಕೆ.ಸಿಂಗ್, ಭಾಅಸೇ., ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಯನ್ನಾಗಿ ನೇಮಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಶ್ರೀ ಬಿ.ಕೆ.ಸಿಂಗ್, ಭಾಅಸೇ., ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಮತ್ತು ಶ್ರೀ ನಾಗರಾಜ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಗೇರು ಅಭಿವೃದ್ಧಿ ನಿಗಮ, ಮಂಗಳೂರು ಇವರುಗಳನ್ನು ಕರ್ನಾಟಕ ಗೇರು ಅಭಿವೃದ್ಧಿ ನಿಗಮ ನಿಯಮಿತ, ಮಂಗಳೂರು ಇದರ ಆಡಳಿತ ಮಂಡಳಿಗೆ ನಿರ್ದೇಶಕರನ್ನಾಗಿ ಸದರಿ ನಿಗಮದ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ಸ್ 23(i) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಪಿ.ಪಾಟೀಲ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

P.R. 218

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಆಸುಇ 17 ಶಿಸನೇ 2013, ಬೆಂಗಳೂರು, ದಿನಾಂಕ: 05ನೇ ಫೆಬ್ರವರಿ, 2013.**

ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿ ಸಂಖ್ಯೆ ಸಿಎಂ/ಜೆಎಸ್/476/ನಾನಿ/2012ರಲ್ಲಿ ರಾಜ್ಯ ಮಟ್ಟದ ನಿಗಮ/ಮಂಡಳಿಗಳಿಗೆ ಅಧಿಕಾರೇತರ ಅಧ್ಯಕ್ಷರುಗಳನ್ನು ಸರ್ಕಾರವು ಈ ಕೆಳಕಂಡವರನ್ನು ನಾಮ ನಿರ್ದೇಶನ ಮಾಡಿದೆ. ಈ ಅಧ್ಯಕ್ಷರುಗಳಿಗೆ ಈ ಕೂಡಲೇ ಜಾರಿಗೆ ಬರುವಂತೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು |
|---|---|
| 1 | ಶ್ರೀಮತಿ ಶೀಲ ಶೆಟ್ಟಿ,<br>ಅಧ್ಯಕ್ಷರು, ಕರ್ನಾಟಕ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿಯಮಿತ |
| 2 | ಶ್ರೀ ರವಿನಾರಾಯಣ ರೆಡ್ಡಿ<br>ಅಧ್ಯಕ್ಷರು, ಬಯಲುಸೀಮೆ ಅಭಿವೃದ್ಧಿ ಮಂಡಳಿ, ಚಿತ್ರದುರ್ಗ |
| 3 | ಶ್ರೀ ಮುನಿಚಿನ್ನಪ್ಪ,<br>ಅಧ್ಯಕ್ಷರು, ಕರ್ನಾಟಕ ರಾಯ ಅಗ್ರೋಕಾರ್ನ್ ಪ್ರಾಡಕ್ಟ್ ಲಿಮಿಟೆಡ್. |
| 4 | ಶ್ರೀ ಎಂ.ಬಿ.ನಂದೀಶ್,<br>ಅಧ್ಯಕ್ಷರು, ಮೈಸೂರು ಸೇಲ್ಸ್ಇಂಟರ್ ನ್ಯಾಷನಲ್ ಲಿಮಿಟೆಡ್ |
| 5 | ಶ್ರೀ ಕೆ.ಶಿವಬೀರಪ್ಪ<br>ಅಧ್ಯಕ್ಷರು, ರಾಜ್ಯ ಮಾರುಕಟ್ಟೆ ಮತ್ತು ಏಜನ್ಸೀಸ್ ನಿಯಮಿತ |
| 6 | ಶ್ರೀ ಸಚ್ಚಿದಾನಂದ ಮೂರ್ತಿ<br>ಅಧ್ಯಕ್ಷರು, ಕಿಯೋನಿಕ್ಸ್ ನಿಗಮ |
| 7 | ಶ್ರೀ ಎಂ.ಎಸ್.ಕೃಷ್ಣೇಗೌಡ<br>ಅಧ್ಯಕ್ಷರು, ಮೈಸೂರು ಪೇಯಿಂಟ್ಸ್ ಮತ್ತು ವಾರ್ನಿಶ್ ಲಿಮಿಟೆಡ್ |
| 8 | ಶ್ರೀ ಎಸ್.ಡಿ.ಮಹೇಂದ್ರ,<br>ಅಧ್ಯಕ್ಷರು, ಕರ್ನಾಟಕ ವಸ್ತು ಪ್ರದರ್ಶನ ಪ್ರಾಧಿಕಾರ |
| 9 | ಶ್ರೀ ಇ.ಮಾರುತಿ ಪವಾರ್<br>ಅಧ್ಯಕ್ಷರು, ಮೃಗಾಲಯ ಪ್ರಾಧಿಕಾರ |
| 10 | ಶ್ರೀ ಎಂ.ಬಿ.ದೇವಯ್ಯ<br>ಅಧ್ಯಕ್ಷರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ |
| 11 | ಶ್ರೀ ಲಕ್ಷ್ಮೀನಾರಾಯಣ<br>ಅಧ್ಯಕ್ಷರು, ಕರ್ನಾಟಕ ಸಾಬೂನು ಮತ್ತು ಮಾರ್ಜಕ ಕಾರ್ಖಾನೆ ನಿಯಮಿತ |
| 12 | ಶ್ರೀ ರಾಮಯ್ಯ<br>ಅಧ್ಯಕ್ಷರು, ಕಂಠೀರವ ಸ್ಟುಡಿಯೋ ನಿಯಮಿತ |
| 13 | ಶ್ರೀ ಕೃಷ್ಣದೇವರಾಯ<br>ಅಧ್ಯಕ್ಷರು, ಕರ್ನಾಟಕ ಪ್ರವಾಸೋದ್ಯಮ ನಿಗಮ |
| 14 | ಶ್ರೀ ಕೆ.ವಿ.ನಾಗೇಂದ್ರ<br>ಅಧ್ಯಕ್ಷರು, ಕರ್ನಾಟಕ ಪ್ರವಾಸೋದ್ಯಮ ನಿಗಮ |
| 15 | ಶ್ರೀ ಎನ್.ಮಂಜುನಾಥ<br>ಅಧ್ಯಕ್ಷರು, ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿ |
| 16 | ಶ್ರೀಮತಿ ಪೂರ್ಣಿಮ ಪ್ರಕಾಶ್<br>ಅಧ್ಯಕ್ಷರು, ಕರಕುಶಲ ಅಭಿವೃದ್ಧಿ ನಿಯಮ |
| 17 | ಶ್ರೀ ರಂಗಾ ಬದ್ಧಿ<br>ಎನ್.ಜಿ.ಇ.ಎಫ್.ಲಿಮಿಟೆಡ್, ಹುಬ್ಬಳ್ಳಿ |

| ಕ್ರಮ ಸಂಖ್ಯೆ | ಹೆಸರು |
|---|---|
| 18 | ಶ್ರೀ ಉಮೇಶ್ ಬಂಟವಾಡಕ್ರ್<br>ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ |
| 19 | ಶ್ರೀ ರಾಜಶೇಖರ್ ಶೀಲವಂತರ<br>ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಯಮ ನಿಯಮಿತ |
| 20 | ಶ್ರೀ ಎಂ.ಎಸ್.ಕರೀಗೌಡ್ರ<br>ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ |
| 21 | ಶ್ರೀ ಶಿವಾನಂದ ಕಲ್ಲೂರ<br>ಈಶಾನ್ಯ  ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ |
| 22 | ಶ್ರೀ ಮಹಾಂತಗೌಡ ಪಾಟೀಲ<br>ಹೈದರಾಬಾದ್-ಕರ್ನಾಟಕ ಅಭಿವೃದ್ಧಿ ಮಂಡಳಿ, ಗುಲ್ಬರ್ಗಾ |
| 23 | ಶ್ರೀ ತ್ರಿವಿಕ್ರಮ ಜೋಶಿ<br>ಡಾ.ಎಂ.ನಂಜುಡಪ್ಪ ವರದಿ ಅನುಷ್ಠಾನ ಸಮಿತಿ |
| 24 | ಶ್ರೀ ಜಿ.ಎಂ.ಸುರೇಶ<br>ಕರ್ನಾಟಕ ಕ್ರೀಡಾ ಪ್ರಾಧಿಕಾರ, ಬೆಂಗಳೂರು |
| 25 | ಶ್ರೀ ಅಶೋಕ ಗಸ್ತಿ<br>ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ |
| 26 | ಡಾ॥ ಎನ್.ಎಫ್.ಮೋಹಿಸನ್<br>ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ |
| 27 | ಶ್ರೀ ಷಣ್ಮುಖ ಗುರಿಕಾರ<br>ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ |
| 28 | ಶ್ರೀ ಪ್ರಕಾಶ ಖಂಡ್ರೆ<br>ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ.ನಿ. |
| 29 | ಶ್ರೀ ಅಡಿವೇಶ ಅಟಗಿ<br>ಮಲಪ್ರಭಾ ಮತ್ತು ಘಟಪ್ರಭಾ ಯೋಜನೆ ಬೆಳಗಾವಿ |
| 30 | ಶ್ರೀ ಗಿರೀಗೌಡ<br>ನೀರಾವರಿ ಯೋಜನಾವಲಯ ಕಾಡಾ, ಶಿವಮೊಗ್ಗ |
| 31 | ಶ್ರೀ ಗಿರೀಶ್ ಪಾಟೀಲ್<br>ಭದ್ರಾ ಕಾಡಾ, ಶಿವಮೊಗ್ಗ. |

**ಎಸ್. ನಾಗರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ರಾಜ್ಯ ಶಿಷ್ಟಾಚಾರ).

**P.R. 220**
**SC - 100**

## HEALTH AND FAMILY WELFARE SECRETARIAT

### NOTIFICATION

### No. HFW 24 FPR 2013, Bangalore, Dated: 20th March 2013

In exercise of the powers conferred under sub-section (1) of 13A of the Transplanatation of Human Organs (Amendment) Act, 2011 (Central Act No. 16 of 2011), the Government of Karnataka hereby constitutes the State Level Advisory Committee for a period of two years with immediate effect, comprising of the following members to aid and advise the appropriate authority to discharge its functions.

| Sl. No. | Name and Designation | Status |
|---|---|---|
| 1 | The Principal Secretary to Government,<br>Health and Family Welfare Department, Vikasa Soudha, Bangalore. | Chairperson |
| 2 | The Director of Health and Family Welfare Services,<br>Anandarao Circle, Bangalore. | Member |

| Sl. No. | Name and Designation | Status |
|---|---|---|
| 3 | The Director of Medical Education,<br>Anandarao circle, Bangalore. | Member |
| 4 | Dr. Balasubramanian,<br>Swamy Vivekananda Youth Movement, Hebbal, Mysore | Member |
| 5 | Smt. Usha Bhapat,<br>Medical and Psychaitric Social Worker,<br>St. Marthas Hospital, Nrupatunga Road, Bangalore. | Member |
| 6 | N. Srivatsa Kedilaya,<br>District Judge (Rtd) Legal consultant,<br>Health and Family Welfare Services,<br>Anandarao Circle, Bangalore. | Member |
| 7 | Smt. Priyanka Shylendra,<br>Manager, Gift Your Organ Foundation,<br>Hosur Main Road, Bangalore. | Member |
| 8 | Dr. G.K. Venkatesh,<br>Director, Institute of Nephro-urology,<br>Victoria Hospital Campus, Bangalore. | Member |
| 9 | Dr. D. Ramesh,<br>Secretary, ZCCK & Professor, HOD-Urology Department,<br>M.S. Ramaiah Medical College, Bangalore. (Special Invitee) | Member |
| 10 | Dr. Devadas,<br>Professor, Department of Forensic Science,<br>Bangalore Medical College and Research Institute, Bangalore. (Special Invitee) | Member |
| 11 | The Joint Director (Medical),<br>Health and Family Welfare Services,<br>Anandarao Circle, Bangalore. | Member Secretary |

By Order and in the name of the Governor of Karnataka,
**I. HEMANATH,**
Under Secretary to Government,
Health and Family Welfare Department.

**P.R. 204**
**SC - 100**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 165 ಬೆಂರೂಪ್ರಾ 2012, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2013**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ (1987ರ ಕರ್ನಾಟಕ ಅಧಿನಿಯಮ ಸಂಖ್ಯೆ 34) 71 ಪ್ರಕರಣ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ (ನಿವೇಶನ ಹಂಚಿಕೆ) ನಿಯಮಗಳು 1991ರ ನಿಯಮ 20ಕ್ಕೆ ತಿದ್ದುಪಡಿ ಮಾಡಿ ಈ ಕೆಳಕಂಡಂತೆ ನಿಯಮಗಳನ್ನು ರಚಿಸಿದೆ ಅಂದರೆ

1. **ಹೆಸರು ಮತ್ತು ಪ್ರಾರಂಭ:** (1) ಈ ನಿಯಮಗಳನ್ನು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ (ನಿವೇಶನ ಹಂಚಿಕೆ) (ತಿದ್ದುಪಡಿ) ನಿಯಮಗಳು 2012 ಎಂದು ಕರೆಯತಕ್ಕದ್ದು.

   (2) ಇವು ಈ ಕೂಡಲೇ ಜಾರಿಗೆ ಬರತಕ್ಕದ್ದು ಮತ್ತು ಇದು 2005ರ ತಿದ್ದುಪಡಿ ನಿಯಮಗಳ ಪೂರ್ವದಲ್ಲಿ ಹಂಚಿಕೆಯಾದ ನಿವೇಶನಗಳಿಗೆ ಮಾತ್ರ ಅನ್ವಯಿಸತಕ್ಕದ್ದು.

2. **20ನೇ ನಿಯಮದ ತಿದ್ದುಪಡಿ:–** ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ (ನಿವೇಶನ ಹಂಚಿಕೆ ನಿಯಮಗಳು 1991ರ 20ನೇ ನಿಯಮದ 3(a)( b) ನಂತರ ಈ ಕೆಳಗಿನ ಪರಂತುಕವನ್ನು ಸೇರಿಸಲಾಗಿದೆ.

ಪರಂತು

4 a. **ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ನಿವೇಶನ ಹಂಚಿಕೆ ನಿಯಮಗಳು** 1991ರ ರೀತ್ಯಾ ಹಂಚಿಕೆಯಾದ ನಿವೇಶನಗಳನ್ನು ಮಂಜೂರಾತಿದಾರರು (ಮಂಜೂರಾತಿ ಷರತ್ತಿನ ಅನ್ವಯ) ಮಂಜೂರಾತಿ ಷರತ್ತನ್ನು ಉಲ್ಲಂಘಿಸಿ 10 ವರ್ಷದ ಗುತ್ತಿಗೆ ಅವಧಿಯೊಳಗೆ ಮನೆ ನಿರ್ಮಿಸಿ/ನಿರ್ಮಿಸದೇ ನೇರ ಮಾರಾಟ ಮಾಡಿರುವ, ಪ್ರಕರಣಗಳಲ್ಲಿ **ಸರ್ಕಾರವು ಕಾಲಕಾಲಕ್ಕೆ ನಿಗಧಿಪಡಿಸುವ ನೋಂದಣಿ ಬೆಲೆಯ ಶೇ.50%ರಷ್ಟು ದಂಡ ಶುಲ್ಕವನ್ನು ಖರೀದಿದಾರರಿಂದ ಪಾವತಿಸಿಕೊಂಡು ಕ್ರಯಪತ್ರ ನೀಡುವುದು.**

b. **ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ನಿವೇಶನ ಹಂಚಿಕೆ ನಿಯಮಗಳು** 1991ರ ರೀತ್ಯಾ ಹಂಚಿಕೆಯಾದ ನಿವೇಶನಗಳನ್ನು ಮಂಜೂರಾತಿದಾರರು 10 ವರ್ಷದ ಗುತ್ತಿಗೆ ಅವಧಿ ಪೂರ್ಣಗೊಂಡ ನಂತರ ಮನೆಯನ್ನು ನಿರ್ಮಿಸಿ/ನಿರ್ಮಿಸದೇ ಕ್ರಯ ಪತ್ರಪಡೆಯದೆ ನೇರ ಮಾರಾಟ ಮಾಡಿರುವ, ಪ್ರಕರಣಗಳಲ್ಲಿ **ಸರ್ಕಾರವು ಕಾಲಕಾಲಕ್ಕೆ ನಿಗಧಿಪಡಿಸುವ ನೋಂದಣಿ ಬೆಲೆಯ ಶೇ.25ರಷ್ಟು ದಂಡ ಶುಲ್ಕವನ್ನು ಖರೀದಿದಾರರಿಂದ ಪಾವತಿಸಿಕೊಂಡು ಕ್ರಯಪತ್ರ ನೀಡುವುದು.**

c. 2001 ರಿಂದ 2005ರ ವರೆಗಿನ ಅವಧಿಯಲ್ಲಿ (ಅಂದರೆ ಸರ್ಕಾರದ ಅಧಿಸೂಚನೆ ಸಂಖ್ಯೆ:ನಅಇ 257 ಎಂಐಬಿ 98, ದಿನಾಂಕ:15–11–2001ರ ರೀತ್ಯಾ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಿವೇಶನ ಹಂಚಿಕೆ) ನಿಯಮಗಳು 1991ಕ್ಕೆ ಹೊರಡಿಸಲಾಗಿದ್ದ ತಿದ್ದುಪಡಿಯನ್ವಯ, ಸರ್ಕಾರವು ಅಧಿಸೂಚನೆ ಸಂಖ್ಯೆ:ಯುಡಿಡಿ 123 ಬೆಂರೂಪ್ರಾ 2005, ದಿನಾಂಕ: 23–5–2005ರಲ್ಲಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಿವೇಶನ ಹಂಚಿಕೆ) ನಿಯಮಗಳು 1991ಕ್ಕೆ ತಂದಿರುವ ತಿದ್ದುಪಡಿ ನಿಯಮಗಳು 2005ರ ವರೆಗಿನ ಅವಧಿಯಲ್ಲಿ) ಹಂಚಿಕೆ ಮಾಡಲಾದ ನಿವೇಶನಗಳ ಮಂಜೂರಾತಿದಾರರು ಇದುವರೆವಿಗೂ ಕ್ರಮಪತ್ರ ಪಡೆಯದಿರುವ ಪ್ರಕರಣಗಳಲ್ಲಿ ಸರ್ಕಾರವು ಕಾಲಕಾಲಕ್ಕೆ ನಿಗಧಿಪಡಿಸುವ ನೋಂದಣಿ ಬೆಲೆಯ ಶೇ.25ರಷ್ಟು ದಂಡ ಶುಲ್ಕವನ್ನು ಖರೀದಿದಾರರಿಂದ ಪಾವತಿಸಿಕೊಂಡು ಕ್ರಯಪತ್ರ ನೀಡುವುದು.

d. **ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ನಿವೇಶನ ಹಂಚಿಕೆ ನಿಯಮಗಳು** 1991ರ ರೀತ್ಯಾ ಹಂಚಿಕೆಯಾದ ನಿವೇಶನಗಳನ್ನು ಮಂಜೂರಾತಿದಾರರು ಗುತ್ತಿಗೆ ಅವಧಿಯೊಳಗೆ ಅಥವಾ ಗುತ್ತಿಗೆ ಅವಧಿ ಪೂರ್ಣಗೊಂಡ ನಂತರ ಮನೆಯನ್ನು ನಿರ್ಮಿಸಿ/ನಿರ್ಮಿಸದೆ ಕ್ರಯ ಪತ್ರ ಪಡೆಯುವ ಮುನ್ನವೇ ಜಿ.ಪಿ.ಎ. ಮಾಡಿಕೊಟ್ಟಿದ್ದು, ಜಿ.ಪಿ.ಎ. ಮೂಲಕ ಅಂತಹ ನಿವೇಶವನ್ನು / ಮನೆಯನ್ನು ಖರೀದಿಸಿರುವ ಪ್ರಕರಣಗಳಲ್ಲಿ ಮಾತ್ರ ಉಪ ನೋಂದಣಾಧಿಕಾರಿಗಳು ನಿಗಧಿಪಡಿಸುವ ಮಾರುಕಟ್ಟೆ ಬೆಲೆಯ ಶೇ.50ರಷ್ಟು ದಂಡ ಶುಲ್ಕವನ್ನು ಖರೀದಿದಾರರಿಂದ ಪಾವತಿಸಿಕೊಂಡು ಕ್ರಯಪತ್ರ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎಂ. ವಾಸುದೇವರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

P R. 228

SC - 150

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಕುಕ 90 ಪಿಟಿಡಿ 2013, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್ 2013**

ಅಂತರ್ –ವಿಷಯ ಆರೋಗ್ಯ ವಿಜ್ಞಾನಗಳು ಮತ್ತು ತಂತ್ರಜ್ಞಾನ ಸಂಸ್ಥೆ ವಿಧೇಯಕ, (2013ರ ಕರ್ನಾಟಕ ಅಧಿನಿಯಮ ಸಂಖ್ಯೆ:35) ರ ಪ್ರಕರಣ (1)ರ ಉಪಪ್ರಕರಣ (3)ರಲ್ಲಿ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು 2ನೇ ಏಪ್ರಿಲ್ 2013ನೇ ದಿನಾಂಕದಿಂದ ಸದರಿ ಅಧಿನಿಯಮದ ಎಲ್ಲಾ ಉಪಬಂಧಗಳು ಜಾರಿಗೆ ಬರಬೇಕೆಂದು ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್. ಹರಿಣಿಯಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯಪದ್ಧತಿ ಮತ್ತು ಸಮನ್ವಯ)

## HEALTH AND FAMILY WELFARE SECRETARIAT

**NO. HFW 90 PTD 2013 Bangalore, Dated: 02nd April 2013**

### NOTIFICATION

In exercise of the power conferred by sub-section (3) of section 1 of Anthar Vishaya Aarogya Vignanagalu mattu Tantragnana Samsthe Adhiniyama, 2013, (Karnataka Act 35 of 2013), the Government of Karnataka, hereby appoints the 02-04-2013 as the date on which all the provisions of the said Act shall come into force.

By Order and in the name of the Governor of Karnataka,

**K.N. Hariniyamma**

Under Secretary to Government,

Health and Family Welfare Department (IMD and Co-Ordination)

P R. 229

SC - 50

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಎನ್ 31 ಸಮನ್ವಯ 2013, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2013**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 30 (1) (ಎ) & (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಗದೀಶ್ ಶೆಟ್ಟರ್, ಮಾನ್ಯ ಮುಖ್ಯ ಮಂತ್ರಿ,

ಕರ್ನಾಟಕ ಸರ್ಕಾರ ಇವರನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರು ಹಾಗೂ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

P.R. 222

## ಇಂಧನ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಇಎನ್ 31 ಸಮನ್ವಯ 2013, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2013

ಸರ್ಕಾರದ ಅಧಿಸೂಚನೆ ಸಂಖ್ಯೆ ಇಎನ್ 75 ಸಮನ್ವಯ 2010 (ಭಾಗ–4) ದಿನಾಂಕ 23–09–2010ರಲ್ಲಿ ಇವರನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 30 (1) & (ಎ) (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕುಮಾರಿ ಶೋಭಾ ಕರಂದ್ಲಾಜೆ, ಮಾನ್ಯ ಇಂಧನ ಸಚಿವರು, ಕರ್ನಾಟಕ ಸರ್ಕಾರ ಇವರನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರು ಹಾಗೂ ಅಧ್ಯಕ್ಷರನ್ನಾಗಿ ನೇಮಿಸಿರುವುದನ್ನು ದಿನಾಂಕ:25–01–2013 ರಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ ಇಎನ್ 75 ಸಮನ್ವಯ 2010 (ಭಾಗ–4) ದಿನಾಂಕ 23–09–2010ರಲ್ಲಿ ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ ಕಲಂ 22 (1) ಮತ್ತು 23 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕುಮಾರಿ ಶೋಭಾ ಕರಂದ್ಲಾಜೆ, ಮಾನ್ಯ ಇಂಧನ ಸಚಿವರು, ಕರ್ನಾಟಕ ಸರ್ಕಾರ ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರು ಹಾಗೂ ಉಪಾಧ್ಯಕ್ಷರನ್ನಾಗಿ ನೇಮಿಸಿರುವುದನ್ನು ದಿನಾಂಕ:25–01–2013 ರಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

P.R. 221

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ನಅಇ 80 ಬೆಮಪ್ರಾ 2013, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2013

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಕಲಂ 3(3)(ಎಂ) ಮತ್ತು (4) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ಬಿಜಾಪುರ ನಗರಾಭಿವೃದ್ಧಿ ಪ್ರಾಧಿಕಾರ ಸದಸ್ಯರನ್ನಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ:ನಅಇ 425 ಬೆಮಪ್ರಾ 2011 ದಿನಾಂಕ: 30–03–201ರಲ್ಲಿ ನಾಮನಿರ್ದೇಶನ ಮಾಡಿ ಅಧಿಸೂಚನೆಯನ್ನು ಹೊರಡಿಸಲಾಗಿತ್ತು.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ವರ್ಗ | ಹುದ್ದೆ |
|---|---|---|---|
| 1 | ಶ್ರೀ ರಾಜಕುಮಾರ ಲಕ್ಷಣ ಜಾಧವ, ಅಲ್ಲಾಪೂರ ತಾಂಡ, ಸಿಂಧಗಿ ರಸ್ತೆ, ಬಿಜಾಪುರ | ಎಸ್.ಸಿ. | ಸದಸ್ಯರು |

ಮೇಲೆ ಪ್ರಸ್ತಾಪಿಸಿರುವ ನಾಮನಿರ್ದೇಶಿತ ಸದಸ್ಯರಾದ ಶ್ರೀ ರಾಜಕುಮಾರ ಲಕ್ಷ್ಮಣ ಜಾಧವ, (ಎಸ್.ಸಿ) ಇವರು ನಾಮನಿರ್ದೇಶವನ್ನು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಪ್ರಕರಣ 3(3)(ಎಂ) ಮತ್ತು (4)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಇಚ್ಛಾನುಸಾರ ರದ್ದುಪಡಿಸಿದೆ. ಇವರ ಸ್ಥಾನದಲ್ಲಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ 3(3)(ಎಂ) ಮತ್ತು (4) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ನಾಮ ನಿರ್ದೇಶನ ಮಾಡಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ವರ್ಗ | ಹುದ್ದೆ |
|---|---|---|---|
| 1 | ಶ್ರೀ ಜವಾಹರ್ ಹನುಮಂತರಾವ್ ಗೋಸಾವಿ, ಮಾಂಗ್ ಗಾರುಡಿ ಕಾಲೋನಿ, ವಾರ್ಡ್ ನಂ14, ಬಿಜಾಪುರ | ಎಸ್.ಸಿ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

P.R. 223

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 56 ಗುಅಪ್ರಾ 2013, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2013**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಕಲಂ 3(3)(ಎ)&(ಎಲ್) ಹಾಗೂ (4)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೀದರ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಕ್ರಮವಾಗಿ ಈ ಕೆಳಕಂಡಂತೆ ಅಧ್ಯಕ್ಷರು ಮತ್ತು ಸದಸ್ಯರನ್ನು ಸರ್ಕಾರದ ಇಚ್ಛಾನುಸಾರ ಅಥವಾ 3 ವರ್ಷದ ಅವಧಿಯವರಿಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ | ವರ್ಗ |
|---|---|---|---|
| 1 | **ಶ್ರೀ ಬಾಬುರಾವ್ ಮದಕಟ್ಟಿ, ಬೀದರ** | **ಅಧ್ಯಕ್ಷರು** | |
| 2 | ಶ್ರೀ ಅನಿಲ್ ಕುಮಾರ್ ಬಿನ್ ಮಾಣಿಕಪ್ಪ ಮೊಟ್ಟಿ, ನಂ.6–8–11, ರಾಮಮಂದಿರ ಹತ್ತಿರ, ಬೀದರ್ | ಸದಸ್ಯರು | ಸಾಮಾನ್ಯ |
| 3 | ಶ್ರೀ ಕಾಶಿನಾಥ ಶೆಟ್ಟಿಕಾರ ಬಿನ್ ಶಿವಶೆಟ್ಟಿ ನಂ.11–12–16, ಮಂಗಲಪೇಟೆ, ಭೀದರ್ | ಸದಸ್ಯರು | ಸಾಮಾನ್ಯ |
| 4 | ಶ್ರೀ ಮಾರುತಿ ಬಿನ್ ಭೀಮಣ್ಣ ಪಂಚಬಾಯಿ, ಗಂಗೋತ್ರಿ, ಕಾಳಿದಾಸನಗರ, ಬಿ.ವಿ.ಬಿ. ರಸ್ತೆ, ಬೀದರ್ | ಸದಸ್ಯರು | ಎಸ್.ಟಿ |
| 5 | ಶ್ರೀಮತಿ ಚಂದ್ರಕಲಾ ಕೋಂ, ಕಮಲಾಕರ ವಿಶ್ವಕರ್ಮ ನಂ.8–11–251, ರಾಘವೇಂದ್ರ ಕಾಲೋನಿ, ಬೀದರ್ | ಸದಸ್ಯರು | ಮಹಿಳೆ |
| 6 | ಶ್ರೀ ಜಗದೀಶ್, ಚಂದ್ರಸ್ವಾಮಿ ಬಿನ್ ವಿಶ್ವನಾಥಸ್ವಾಮಿ, ನಂ.9– 9–3, ನಂದಾದೀಪ, ಬಿ.ವಿ.ಬಿ. ಕಾಲೇಜು ರಸ್ತೆ, ಬೀದರ್ | ಸದಸ್ಯರು | ವಾಸ್ತುಶಿಲ್ಪಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**P.R. 224**

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆರ್‌ಡಿ 104 ಎಲ್‌ಜಿಬಿ 2013, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2013**

ಸರ್ಕಾರದ ಅಧಿಸೂಚನೆ ಸಂಖ್ಯೆ:ಆರ್‌ಡಿ 684 ಎಲ್‌ಜಿಬಿ 2009, ದಿನಾಂಕ: 16–10–2009ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿ ಸದಸ್ಯರಾಗಿ ನೇಮಿಸಿದ್ದ ಶ್ರೀ ಪಿ.ಮುನಿರಾಜು ಬಿನ್ ಪಾಪಣ್ಣ (ಪರಿಶಿಷ್ಟ ಜಾತಿ) ಕಸಬಾ ಹೋಬಳಿ, ಕಣ್ಣೂರಹಳ್ಳಿ ಗ್ರಾಮ ಇವರ ಸದಸ್ಯತ್ವವನ್ನು ರದ್ದುಪಡಿಸಿ ಇವರ ಜಾಗದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಜಡಿಗೇನಹಳ್ಳಿ ಹೋಬಳಿ, ದೊಡ್ಡಗಟ್ಟಗನಬ್ಬೆ ಅಂಚೆ, ಜಿನ್ನಾಗರ ಗ್ರಾಮದ ವಾಸಿಯಾದ ಶ್ರೀ ಜೆ.ಎಂ.ಜಗನ್ನಾಥ್ ಬಿನ್ ಮರಿಯಪ್ಪ (ಪರಿಶಿಷ್ಟ ಜಾತಿ) ಇವರನ್ನು ಸದರಿ ಸಮಿತಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾದೇವಿ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ–1)

**P R. 225**
**SC - 50**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 58 ಗುಅಪ್ರಾ 2013, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2013**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 3(3)(ಎ) & (4)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅನಂತಪದ್ಮನಾಭ ಕೆ. ವಿದ್ಯಾಬಾಯಿ ಕಾಂಪೌಂಡ್, 7ನೇ ಅಡ್ಡ ರಸ್ತೆ, ಮೃತ್ಯುಂಜಯ ನಗರ, ಹೊಸಪೇಟೆ ರವರನ್ನು ಹೊಸಪೇಟೆ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ಸರ್ಕಾರದ ಇಚ್ಛಾನುಸಾರದವರೆಗೆ ಅಥವಾ 3 ವರ್ಷಗಳ ಅವಧಿವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**P.R. 226**

# HOME SECRETARIAT

## NOTIFICATION

## NO. HD 85 SST 2013 Bangalore, Dated: 26TH March 2013

In exercise of the power conferred by Section 21 of the Code of Criminal Procedure, 1973 (Central Act 2 of 1974) the Government of Karnataka hereby appoint the following officers specified in column No (2) for the areas specified in column No. (3) as **Executive Magistrates** for the Flying Squads to Karnataka Legislative Assembly Elections 2013 and confer on them all the powers as are conferrable on Executive Magistrates under the said Code for tracking illegal cash transactions or any distribution of liquor or any other items suspected of being used for bribing the voter in BELLARY upto and including 08-05-2013.

| Sl. No. | No. & Name of Assembly Constituency | Officer Name and Designation Sriyuts |
|---|---|---|
| 1. | 88 Hadagali (SC) | Shankara Reddy N.T.<br>Assistant Director,<br>TP-Department of Town & Country Planning |
| 2 | 89 Hagaribommanahalli (SC) | Dr William Rajshekar, District<br>Watershed Development Officer,<br>Ws-Department of Watershed Development |
| 3 | 90 Vijayanagara | K. Mohammed Irfan,<br>Deputy Director, Zi-Industrial Dev And Director of<br>Industries And Commerce |
| 4 | 91 Kampli (ST) | L Siddeswara,<br>Assistant Director of Agriculture,<br>Za-Department of Agriculture (Zp) |
| 5 | 92 Siruguppa (ST) | Sudhakar N K,<br>Assistant Director of Agriculture,<br>Dept. of Watershed Development, Bellary |
| 6 | 93 Bellary (ST) | B Somannanavar,<br>Special Land Acquisition Officer, NHAI, Hospet |
| 7 | 94 Bellary City | Arifuddin,<br>Deputy Commissioner (Revenue) BCC, Bellary<br>Sri Anirudh Shravana IAS Probationer |
| 8 | 95 Sandur (ST) | Panditrao Biradar,<br>Grade II Tahsildar, Sandur |
| 9 | 96 Kudligi (ST) | Pramood,<br>Grade II Tahsildar, Kudligi |

By order and in the name of the Governor of Karnataka
**PRAKASH Y K**
Under Secretary to Government,
Home Department (Law and Order)

**P.R. 206**

# ಇಂಧನ ಸಚಿವಾಲಯ

## ಅಧಿಸೂಚನೆ

## ಸಂಖ್ಯೆ: ಇಎನ್ 07 ಸಮನ್ವಯ 2013, ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2013

ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಬೆಂಗಳೂರು ಇವರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 22 (i) & 23 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್. ನಾಗರಾಜ, ಕಾರ್ಯನಿರ್ವಾಹಕ ನಿರ್ದೇಶಕರು (ಹಣಕಾಸು), ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ನಿರ್ದೇಶಕರು (ಹಣಕಾಸು) ಆಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

**P.R. 209**

## ಅರಣ್ಯ, ಪರಿಸರ ಮತ್ತು ಜೀವಿಪರಿಸ್ಥಿತಿ ಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಅಪಜೀ 187 ಎಫ್‌ಎಎಫ್ 2012, ಬೆಂಗಳೂರು, ದಿನಾಂಕ: 07ನೇ ಜನವರಿ 2013**

ಕರ್ನಾಟಕ ಅರಣ್ಯ ಕಾಯ್ದೆ 1963ರ (1964ನೇ ಇಸವಿಯ ಕರ್ನಾಟಕ ಕಾಯ್ದೆ–5) ಕಲಂ–4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ "ಅನುಸೂಚಿ"ಯಲ್ಲಿ ನಮೂದಿಸಿರುವ ಚಿಕ್ಕಮಗಳೂರು ಜಿಲ್ಲೆ, ಶೃಂಗೇರಿ ತಾಲ್ಲೂಕು, ಕಸಬಾ ಹೋಬಳಿ ಕುಂತೂರು ಗ್ರಾಮದ ಸರ್ಕಾರಿ ಜಮೀನುಗಳನ್ನು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ 'ಮೀಸಲು ಅರಣ್ಯ' ಎಂದು ರಚಿಸಲು ಉದ್ದೇಶಿಸಿದೆ ಎಂದು ಘೋಷಿಸುತ್ತದೆ.

**"ಅನುಸೂಚಿ"**

| | |
|---|---|
| ಜಿಲ್ಲೆ | ಚಿಕ್ಕಮಗಳೂರು |
| ಕಂದಾಯ ಉಪ ವಿಭಾಗ | ಚಿಕ್ಕಮಗಳೂರು |
| ತಾಲ್ಲೂಕು | ಶೃಂಗೇರಿ |
| ಹೋಬಳಿ | ಕಸಬಾ |
| ಗ್ರಾಮ | ಕುಂತೂರು |
| ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದ ಹೆಸರು | ಕುಂತೂರು ಈಸ್ಟ್ ಬ್ಲಾಕ್–I ಮತ್ತು II |

1. **"ಅನುಸೂಚಿಯ"** ವಿವರ

(ಅ) ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದ ಸರ್ವೆ ನಂಬರ್‌ವಾರು ವಿವರ.

| ಗ್ರಾಮ | ಸರ್ವೆ ನಂಬರ್ | ವಿಸ್ತೀರ್ಣ ಎಕರೆ–ಗುಂಟೆ |
|---|---|---|
| ಕುಂತೂರು | 256 | 145–19 |
| | 270 | 107–16 |
| | 57 | 168–26 |
| | 94 | 4–02 |
| | 268 | 9–29 |
| | ಒಟ್ಟು | 435–12 |

(ಆ) ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದ ಬ್ಲಾಕ್‌ವಾರು ವಿವರ.

| ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶಗಳಲ್ಲಿರುವ ಬ್ಲಾಕ್‌ಗಳ ಹೆಸರು | ಗ್ರಾಮ | ಸರ್ವೆ ನಂಬರ್ | ವಿಸ್ತೀರ್ಣ ಎಕರೆ–ಗುಂಟೆ |
|---|---|---|---|
| ಕುಂತೂರು ಈಸ್ಟ್ ಬ್ಲಾಕ್–I | ಕುಂತೂರು | 256 | 145–19 |
| | | 270 | 107–16 |
| | | 57 | 117–21 |
| | | 94 | 4–02 |
| | | 268 | 9–29 |
| | | | **384–07** |
| ಕುಂತೂರು ಈಸ್ಟ್ ಬ್ಲಾಕ್–II | ಕುಂತೂರು | 57 | 51–05 |
| | | | 51–05 |
| **ಎರಡು ಬ್ಲಾಕ್‌ಗಳ ಒಟ್ಟು ವಿಸ್ತೀರ್ಣ** | | | **435–12** |

2. ಕರ್ನಾಟಕ ಅರಣ್ಯ ಕಾಯಿದೆ 1963, ಸೆಕ್ಷನ್ 4(1)(ಸಿ) ಅನ್ವಯ ಕರ್ನಾಟಕ ಸರ್ಕಾರವು ಕಂದಾಯ ಉಪ ವಿಭಾಗಾಧಿಕಾರಿಗಳು, ಚಿಕ್ಕಮಗಳೂರು ಉಪ ವಿಭಾಗ, ಚಿಕ್ಕಮಗಳೂರು ಇವರನ್ನು **"ಅರಣ್ಯ ವ್ಯವಸ್ಥಾಪನಾಧಿಕಾರಿ"**ಗಳನ್ನಾಗಿ ಈ ಮೂಲಕ ನೇಮಿಸಲಾಗಿದೆ. ಕರ್ನಾಟಕ ಅರಣ್ಯ ಕಾಯಿದೆ 1963, ಚಾಪ್ಟರ್–IIರ ಪ್ರಕಾರ ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಅನುಸೂಚಿಯಲ್ಲಿ ನಮೂದಿಸಿರುವ ಪ್ರದೇಶದ ಮೇಲೆ ಯಾವುದೇ ವ್ಯಕ್ತಿಗೆ ಇರಬಹುದಾಗಿರುವ ಹಕ್ಕು ಬಾಧ್ಯತೆಗಳನ್ನು ವಿಚಾರಣೆ ಮಾಡಿ, ನಿರ್ಧರಿಸಿ, ಇತ್ಯರ್ಥಗೊಳಿಸಿ, ತೀರ್ಮಾನಿಸುವುದು.

3. ಕರ್ನಾಟಕ ಅರಣ್ಯ ಕಾಯಿದೆ 1963, ಸೆಕ್ಷನ್ 4(2)ರ ಅನ್ವಯ ಕರ್ನಾಟಕ ಸರ್ಕಾರವು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೊಪ್ಪ ವಿಭಾಗ, ಕೊಪ್ಪ ಇವರನ್ನು ಈ ವಿಚಾರಣೆಯಲ್ಲಿ ಅರಣ್ಯ ವ್ಯವಸ್ಥಾಪನಾಧಿಕಾರಿಗಳಿಗೆ ಸಹಕರಿಸಲು ಹಾಗೂ ಅರಣ್ಯ ಇಲಾಖೆಯ ಪರವಾಗಿ ಪ್ರತಿನಿಧಿಸಲು ಈ ಮೂಲಕ ನೇಮಿಸಲಾಗಿದೆ.

4. ಕರ್ನಾಟಕ ಅರಣ್ಯ ಕಾಯಿದೆ 1963, ಸೆಕ್ಷನ್ 11, 12, ಮತ್ತು 14ರ ಅನ್ವಯ ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಹೊರಡಿಸಿದ ಆದೇಶದಿಂದ ಬಾಧಿತರಾದ ವ್ಯಕ್ತಿಗಳು ಆದೇಶ ಹೊರಡಿಸಿದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಕರ್ನಾಟಕ ಕಂದಾಯ ಮೇಲ್ಮನವಿ ನ್ಯಾಯ ಮಂಡಳಿಗೆ ಮೇಲ್ಮನವಿ ಸಲ್ಲಿಸಬಹುದಾಗಿರುತ್ತದೆ.

5. ಕರ್ನಾಟಕ ಅರಣ್ಯ ಕಾಯಿದೆ 1963, ಸೆಕ್ಷನ್ 15ರ ಅನ್ವಯ ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಹೊರಡಿಸಿದ ಆದೇಶದಿಂದ ಬಾಧಿತರಾದ ವ್ಯಕ್ತಿಗಳು ಸದರಿ ಆದೇಶ ಹೊರಡಿಸಿದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಜಿಲ್ಲಾ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು.

6. **ಇತರೆ ಸವಲತ್ತುಗಳು** :–ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದಲ್ಲಿ ಸ್ಥಳೀಯ ನಿವಾಸಿಗಳಿಗೆ ಎಳೆಯ ನೆಡುತೋಪು ಪ್ರದೇಶಗಳನ್ನು ಹೊರತುಪಡಿಸಿ ಉಳಿದ ಪ್ರದೇಶಗಳಲ್ಲಿ ತಮ್ಮ ಜಾನುವಾರುಗಳಿಗೆ ಉಚಿತವಾಗಿ ಹುಲ್ಲು ಮೇಯಿಸಲು ಹಾಗೂ ತಮ್ಮ ಸ್ವಂತ ಉಪಯೋಗಕ್ಕಾಗಿ ಉಚಿತವಾಗಿ ಒಣ ಎಲೆ ಮತ್ತು ಒಣ ಸೌದೆಯನ್ನು ಸಂಗ್ರಹಿಸಲು ಅವಕಾಶವಿರುತ್ತದೆ. ಎನ್‌ಕ್ಲೋಷರ್‌ಗಳಲ್ಲಿರುವ ನಿವಾಸಿಗಳು ತಮ್ಮ ಸ್ವಂತ ಉಪಯೋಗಕ್ಕಾಗಿ ರಸ್ತೆಯ ಹಕ್ಕನ್ನು ಹೊಂದಿರುತ್ತಾರೆ. ಕಂದಾಯ ಇಲಾಖೆಯಿಂದ ದಿನಾಂಕ : 05–06–2002ರ ವರೆಗೆ ನೀಡಿರುವ ಸೊಪ್ಪಿನಬೆಟ್ಟ ಹಕ್ಕನ್ನು ಹಾಗೆಯೇ ಮುಂದುವರೆಸಲಾಗಿದೆ.

7. ಉದ್ದೇಶಿತ **"ಮೀಸಲು ಅರಣ್ಯ"** ಪ್ರದೇಶದ ಪ್ರತಿ ಬ್ಲಾಕ್‌ಗೆ ಸಂಬಂಧಿಸಿದ ಸಂಕ್ಷಿಪ್ತ ಸರಹದ್ದು ವಿವರಣೆ ಮತ್ತು ಸವಿವರವಾದ ಸರಹದ್ದು ವಿವರಗಳನ್ನು ಮುಂದೆ ವಿವರಿಸಿದೆ.

## ಕುಂತೂರು ಈಸ್ಟ್ ಬ್ಲಾಕ್ – I

### ಸಂಕ್ಷಿಪ್ತ ಸರಹದ್ದುಗಳು ಈ ಕೆಳಗಿನಂತಿವೆ.

**ಉತ್ತರ** :–ಕುಂತೂರು–ಕಿಕ್ರೆ ಗ್ರಾಮಗಳ ಸಾಮಾನ್ಯ ಗಡಿ.

**ಪೂರ್ವ** :–ಕೊಪ್ಪ ತಾಲ್ಲೂಕಿನ ದಯಂಬಳ್ಳಿ ಮತ್ತು ಶೃಂಗೇರಿ ತಾಲ್ಲೂಕು, ಕುಂತೂರು ಗ್ರಾಮಗಳ ಸಾಮಾನ್ಯ ಗಡಿ ಮತ್ತು ಗಿಣಿಕಲ್ಲು–ಕುಂತೂರು ಗ್ರಾಮಗಳ ಸಾಮಾನ್ಯ ಗಡಿ.

**ದಕ್ಷಿಣ** :–ಕುಂತೂರು ಸರ್ವೆ ನಂಬರ್ 57, 270, 57 ರ ಉಳಿಕೆ ಪ್ರದೇಶ.

**ಪಶ್ಚಿಮ** :–ಕುಂತೂರು ಸರ್ವೆ ನಂಬರ್ 57, 94, 57, 268, 256ರ ಉಳಿಕೆ ಪ್ರದೇಶ.

### ಸವಿವರವಾದ ಸರಹದ್ದು ವಿವರಣೆ

**ಉತ್ತರ** :–ಸೀಮಾರೇಖೆಯು ಕುಂತೂರು ಗ್ರಾಮದ ಸರ್ವೆ ನಂಬರ್ 200 ಮತ್ತು 201ರ ಪೂರ್ವ ದಿಕ್ಕಿನ ಹಳ್ಳದ ಪಕ್ಕದಲ್ಲಿರುವ ಕೂಡುಬಾಂದಿನಿಂದ $011^0$ ಕೋನ 5–10 ಸರಪಳಿ ದೂರದಲ್ಲಿ ಹಳ್ಳದ ಪಕ್ಕದಲ್ಲಿರುವ ಕುಂತೂರು–ಕಿಕ್ರೆ ಗ್ರಾಮಗಳ ಸಾಮಾನ್ಯ ಗಡಿಬಾಂದಿನಲ್ಲಿ ಸ್ಥಾನ ಸಂಖ್ಯೆ 1 ರಿಂದ ಪ್ರಾರಂಭವಾಗಿ ಕುಂತೂರು–ಕಿಕ್ರೆ ಗ್ರಾಮಗಳ ಸಾಮಾನ್ಯ ಗಡಿಯಲ್ಲಿ ಪೂರ್ವಾಭಿಮುಖವಾಗಿ ಸುಮಾರು **99–30** ಸರಪಳಿ ದೂರ ಚಲಿಸಿ ಕಿಕ್ರೆ–ಕುಂತೂರು–ದಯಂಬಳ್ಳಿ ಮೂರು ಗ್ರಾಮಗಳ ಗಡಿಗಳು ಸೇರುವ ಮುಕ್ಕುಪ್ಪೆ ಬಾಂದಿನಲ್ಲಿ ಸ್ಥಾನ ಸಂಖ್ಯೆ 7ನ್ನು ಸೇರುತ್ತದೆ.

**ಉತ್ತರದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ.**

| ಸ್ಥಾನದಿಂದ | ಸ್ಥಾನಕ್ಕೆ | ಕೋನ ಡಿಗ್ರಿಗಳಲ್ಲಿ ಸೀಮಾರೇಖೆಯ ವಿವರಣೆ, ಸ್ಥಾನ ಸಂಖ್ಯೆಯ ವಿವರಣೆ | ಅಂತರ ಸರಪಳಿಗಳಲ್ಲಿ ಒಂದು ಸರಪಳಿ=ಒಂದು ನೂರು ಕೊಂಡಿಗಳು=ಇಪ್ಪತ್ತು ಮೀಟರ್‌ಗಳು **ಸರಪಳಿ–ಕೊಂಡಿಗಳು** |
|---|---|---|---|
| 1 | 2 | ಕಿಕ್ರೆ ಮತ್ತು ಕುಂತುರು ಗ್ರಾಮಗಳ ಸಾಮಾನ್ಯ ಗಡಿ | 10–50 |
| 2 | 3 | –ಡಿಟೋ– | 49–25 |
| 3 | 4 | ಕಿಕ್ರೆ ಮತ್ತು ಕುಂತೂರು ಗ್ರಾಮಗಳ ಸಾಮಾನ್ಯ ಗಡಿ | 5–90 |
| 4 | 5 | –ಡಿಟೋ– | 1–40 |
| 5 | 6 | –ಡಿಟೋ– | 5–15 |
| 6 | 7 | ಕಿಕ್ರೆ–ಕುಂತೂರು ಮತ್ತು ದಯಂಬಳ್ಳಿ ಮೂರು ಗ್ರಾಮಗಳ ಗಡಿಗಳು ಸೇರುವ ಮುಕ್ಕುಪ್ಪೆ ಬಾಂದುವಿನಲ್ಲಿ | 27–10 |
| | | | **99–30** |

**ಪೂರ್ವ** :– ಸೀಮಾರೇಖೆಯು ಸ್ಥಾನ ಸಂಖ್ಯೆ 7 ರಿಂದ ಮುಂದುವರಿದು ಕುಂತೂರು–ದಯಂಬಳ್ಳಿ ಗ್ರಾಮಗಳ ಸಾಮಾನ್ಯ ಗಡಿಯಲ್ಲಿ ಆಗ್ನೇಯ, ದಕ್ಷಿಣಾಭಿಮುಖವಾಗಿ ಸುಮಾರು **86–95** ಸರಪಳಿ ದೂರ ಚಲಿಸಿ ಕಂತೂರು–ದಯಂಬಳ್ಳಿ–ಗಿಣಿಕಲ್ಲು ಮೂರು ಗ್ರಾಮಗಳ ಗಡಿಗಳು ಸೇರುವ ಮುಕ್ಕುಪ್ಪೆ ಬಾಂದಿನಲ್ಲಿ ಸ್ಥಾನ ಸಂಖ್ಯೆ 10ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು–ಗಿಣಿಕಲ್ಲು ಗ್ರಾಮಗಳ ಸಾಮಾನ್ಯ ಗಡಿಯಲ್ಲಿ ನೈರುತ್ಯಾಭಿಮುಖವಾಗಿ **11–15** ಸರಪಳಿ ದೂರ ಚಲಿಸಿ ಸದರಿ ಕುಂತೂರು–ಗಿಣಿಕಲ್ಲು ಗ್ರಾಮಗಳ ಸಾಮಾನ್ಯ ಗಡಿಯಲ್ಲಿಯೇ ಸ್ಥಾನ ಸಂಖ್ಯೆ 12ನ್ನು ಸೇರುತ್ತದೆ.

**ಪೂರ್ವದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ.**

| ಸ್ಥಾನದಿಂದ | ಸ್ಥಾನಕ್ಕೆ | ಕೋನ ಡಿಗ್ರಿಗಳಲ್ಲಿ ಸೀಮಾರೇಖೆಯ ವಿವರಣೆ, ಸ್ಥಾನ ಸಂಖ್ಯೆಯ ವಿವರಣೆ | ಅಂತರ ಸರಪಳಿಗಳಲ್ಲಿ ಒಂದು ಸರಪಳಿ=ಒಂದು ನೂರು ಕೊಂಡಿಗಳು=ಇಪ್ಪತ್ತು ಮೀಟರ್‌ಗಳು **ಸರಪಳಿ–ಕೊಂಡಿಗಳು** |
|---|---|---|---|
| 7 | 8 | ಕುಂತೂರು ಮತ್ತು ದಯಂಬಳ್ಳಿ ಗ್ರಾಮಗಳ ಸಾಮಾನ್ಯ ಗಡಿ | 31–55 |
| 8 | 9 | ಕುಂತೂರು ಮತ್ತು ದಯಂಬಳ್ಳಿ ಗ್ರಾಮಗಳ ಸಾಮಾನ್ಯ ಗಡಿ | 16–10 |
| 9 | 10 | ಕುಂತೂರು–ಗಿಣಿಕಲ್ಲು ಗ್ರಾಮಗಳ ಸಾಮಾನ್ಯ ಗಡಿ ಮತ್ತು ಕುಂತೂರು–ದಯಂಬಳ್ಳಿ–ಗಿಣಿಕಲ್ಲು ಮೂರು ಗ್ರಾಮಗಳ ಗಡಿಗಳು ಸೇರುವ ಮುಕ್ಕುಪ್ಪೆ ಬಾಂದಿನಲ್ಲಿ | 39–30 |
| | | | **86–95** |
| 10 | 11 | ಕುಂತೂರು–ಗಿಣಿಕಲ್ಲು ಗ್ರಾಮಗಳ ಸಾಮಾನ್ಯ ಗಡಿ | 6–20 |
| 11 | 12 | ಕುಂತೂರು ಮತ್ತು ಗಿಣಿಕಲ್ಲು ಗ್ರಾಮಗಳ ಸಾಮಾನ್ಯ ಗಡಿಯಲ್ಲಿ ನೈರುತ್ಯಾಭಿಮುಖವಾಗಿ | 4–95 |
| | | | **11–15** |

ದಕ್ಷಿಣ :–ಸೀಮಾರೇಖೆಯು ಸ್ಥಾನ ಸಂಖ್ಯೆ 12 ರಿಂದ ಮುಂದುವರಿದು ಕುಂತೂರು ಗ್ರಾಮದ ಸರ್ವೆ ನಂಬರ್ 57ರಲ್ಲಿ ವಿವಿಧ ಕೋನಗಳಲ್ಲಿ **33–90** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 51ರ ಈಶಾನ್ಯ ಬಾಂದಿನಿಂದ $045^0$ ಕೋನ 1–80 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 17ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಗ್ರಾಮದ ಸರ್ವೆ ನಂಬರ್ 57ರಲ್ಲಿ ಉತ್ತರಾಭಿಮುಖವಾಗಿ **15–20** ಸರಪಳಿ ದೂರ ಚಲಿಸಿ ಕುಂತೂರು ಗ್ರಾಮದ ಸರ್ವೆ ನಂಬರ್ 288ರ ದಕ್ಷಿಣಾಗ್ರ ಬಾಂದುವಿನಲ್ಲಿ ಸ್ಥಾನ ಸಂಖ್ಯೆ 19ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಗ್ರಾಮದ ಸರ್ವೆ ನಂಬರ್ 57 ಮತ್ತು 270 ರಲ್ಲಿ ವಿವಿಧ ಕೋನಗಳಲ್ಲಿ **19–50** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 288ರ ದಕ್ಷಿಣಾಗ್ರ ಬಾಂದಿನಿಂದ $047^0$ ಕೋನ **11–45** ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 24ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 270ರಲ್ಲಿ ವಿವಿಧ ಕೋನಗಳಲ್ಲಿ **37–30** ಸರಪಳಿ ದೂರ ಚಲಿಸಿ ಕುಂತೂರು ಗ್ರಾಮದ ಸರ್ವೆ ನಂಬರ್ 271ರ ಈಶಾನ್ಯ ಮೂಲೆಬಾಂದಿನಲ್ಲಿ ಸ್ಥಾನ ಸಂಖ್ಯೆ 31ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 270ರಲ್ಲಿ ವಿವಿಧ ಕೋನಗಳಲ್ಲಿ 10–15 ಸರಪಳಿ ದೂರ ಚಲಿಸಿ ಸರ್ವೆ ನಂಬರ್ 272ರ ವಾಯುವ್ಯ ಮೂಲೆ ಬಾಂದಿನಲ್ಲಿ ಸ್ಥಾನ ಸಂಖ್ಯೆ 34ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 270 ಮತ್ತು 57ರಲ್ಲಿ ವಿವಿಧ ಕೋನಗಳಲ್ಲಿ **29–90** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 55ರ ವಾಯುವ್ಯ ದಿಕ್ಕಿನ ಹಳ್ಳದ ಪಕ್ಕದ ಬಾಂದಿನಿಂದ $286^0$ ಕೋನ 2–50 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 41ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 57ರಲ್ಲಿ ವಿವಿಧ ಕೋನಗಳಲ್ಲಿ **39–85** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 27ರ ಹಳ್ಳದ ಪಕ್ಕದ ಆಗ್ನೇಯ ಬಾಂದಿನಲ್ಲಿ ಸ್ಥಾನ ಸಂಖ್ಯೆ 46ನ್ನು ಸೇರುತ್ತದೆ.

**ದಕ್ಷಿಣದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ.**

| ಸ್ಥಾನದಿಂದ | ಸ್ಥಾನಕ್ಕೆ | ಕೋನ ಡಿಗ್ರಿಗಳಲ್ಲಿ ಸೀಮಾರೇಖೆಯ ವಿವರಣೆ, ಸ್ಥಾನ ಸಂಖ್ಯೆಯ ವಿವರಣೆ | ಅಂತರ ಸರಪಳಿಗಳಲ್ಲಿ ಒಂದು ಸರಪಳಿ=ಒಂದು ನೂರು ಕೊಂಡಿಗಳು=ಇಪ್ಪತ್ತು ಮೀಟರ್‌ಗಳು **ಸರಪಳಿ–ಕೊಂಡಿಗಳು** |
|---|---|---|---|
| 12 | 13 | $287^0$ | 5–45 |
| 13 | 14 | $247^0$ | 10–35 |
| 14 | 15 | $253^0$ | 5–65 |
| 15 | 16 | $352^0$ | 4–45 |
| 16 | 17 | $268^0$ | 8–00 |
| | | | **33–90** |
| 17 | 18 | $009^0$ | 10–05 |
| 18 | 19 | ಕುಂತೂರು ಸರ್ವೆ ನಂಬರ್ 288 ರ ದಕ್ಷಿಣಾಗ್ರ ಬಾಂದಿನಲ್ಲಿ | 5–15 |
| | | | **15–20** |

| ಸ್ಥಾನದಿಂದ | ಸ್ಥಾನಕ್ಕೆ | ಕೋನ ಡಿಗ್ರಿಗಳಲ್ಲಿ ಸೀಮಾರೇಖೆಯ ವಿವರಣೆ, ಸ್ಥಾನ ಸಂಖ್ಯೆಯ ವಿವರಣೆ | ಅಂತರ ಸರಪಳಿಗಳಲ್ಲಿ ಒಂದು ಸರಪಳಿ=ಒಂದು ನೂರು ಕೊಂಡಿಗಳು=ಇಪ್ಪತ್ತು ಮೀಟರ್‌ಗಳು **ಸರಪಳಿ–ಕೊಂಡಿಗಳು** |
|---|---|---|---|
| 19 | 20 | $111^0$ | 3–40 |
| 20 | 21 | $145^0$ | 1–35 |
| 21 | 22 | $059^0$ | 7–45 |
| 22 | 23 | $356^0$ | 5–20 |
| 23 | 24 | $308^0$ | 2–10 |
| | | | **19–50** |
| 24 | 25 | $053^0$ | 6–65 |
| 25 | 26 | $081^0$ | 3–40 |
| 26 | 27 | $309^0$ | 6–75 |
| 27 | 28 | $355^0$ | 3–85 |
| 28 | 29 | $015^0$ | 6–50 |
| 29 | 30 | $347^0$ | 6–70 |
| 30 | 31 | ಕುಂತೂರು ಸರ್ವೆ ನಂಬರ್ 271ರ ಈಶಾನ್ಯ ಮೂಲೆ ಬಾಂದಿನಲ್ಲಿ | 3–45 |
| | | | **37–30** |
| 31 | 32 | $276^0$ | 3–25 |
| 32 | 33 | $211^0$ | 4–45 |
| 33 | 34 | ಕುಂತೂರು ಸರ್ವೆ ನಂಬರ್ 272ರ ವಾಯುವ್ಯ ಮೂಲೆ ಬಾಂದಿನಲ್ಲಿ | 2–45 |
| | | | **10–15** |
| 34 | 35 | $216^0$ | 2–40 |
| 35 | 36 | $201^0$ | 7–05 |
| 36 | 37 | $224^0$ | 3–80 |
| 37 | 38 | $211^0$ | 3–20 |
| 38 | 39 | $246^0$ | 3–90 |
| 39 | 40 | $189^0$ | 8–05 |
| 40 | 41 | $218^0$ | 2–50 |
| | | | **29–90** |
| 41 | 42 | $226^0$ | 5–25 |
| 42 | 43 | $300^0$ | 7–45 |
| 43 | 44 | $246^0$ | 6–00 |
| 44 | 45 | $327^0$ | 8–00 |
| 45 | 46 | ಕುಂತೂರು ಸರ್ವೆ ನಂಬರ್ 27ರ ಹಳ್ಳದ ಪಕ್ಕದ ಆಗ್ನೇಯ ಬಾಂದಿನಲ್ಲಿ | 13–15 |
| | | | **39–85** |

ಪಶ್ಚಿಮ :–ಸೀಮಾರೇಖೆಯು ಸ್ಥಾನ ಸಂಖ್ಯೆ 46 ರಿಂದ ಮುಂದುವರಿದು ಕುಂತೂರು ಗ್ರಾಮದ ಸರ್ವೆ ನಂಬರ್ 57ರಲ್ಲಿ ವಿವಿಧ ಕೋನಗಳಲ್ಲಿ **19–90** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 7 ಮತ್ತು 8 ರ ದಕ್ಷಿಣ ದಿಕ್ಕಿನ ಕೂಡುಬಾಂದಿನಿಂದ $273^0$ ಕೋನ 5–30 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 50ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಗ್ರಾಮದ ಸರ್ವೆ ನಂಬರ್ 57 ರಲ್ಲಿ ವಿವಿಧ ಕೋನಗಳಲ್ಲಿ **41–85**

ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 1ರ ಈಶಾನ್ಯ ಬಾಂದಿನಿಂದ $050^0$ ಕೋನ **1–70** ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 58ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 57 ರಲ್ಲಿ ವಿವಿಧ ಕೋನಗಳಲ್ಲಿ **31–25** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 14 ಮತ್ತು 15ರ ಉತ್ತರ ದಿಕ್ಕಿನ ಕೂಡುಬಾಂದಿನಿಂದ $027^0$ ಕೋನ 4–45 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 63ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 57 ಮತ್ತು 94ರಲ್ಲಿ ವಿವಿಧ ಕೋನಗಳಲ್ಲಿ **23–55** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 57, 94 ಮತ್ತು 263 ಕೂಡುವ ಮುಕ್ಕುಪ್ಪೆ ಬಾಂದಿನಲ್ಲಿ ಸ್ಥಾನ ಸಂಖ್ಯೆ 67ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 57 ರಲ್ಲಿ ವಿವಿಧ ಕೋನಗಳಲ್ಲಿ **29–85** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 264 ಮತ್ತು 265 ರ ಪಶ್ಚಿಮ ದಿಕ್ಕಿನ ಕೂಡುಬಾಂದಿನಿಂದ $317^0$ ಕೋನ 4–55 ಸರಪಳಿ ದೂರದಲ್ಲಿ ಸರ್ವೆ ನಂಬರ್ 57 ಮತ್ತು 263ರ ಸಾಮಾನ್ಯ ಗಡಿಯಲ್ಲಿ ಸ್ಥಾನ ಸಂಖ್ಯೆ 75ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 57ರಲ್ಲಿ ವಿವಿಧ ಕೋನಗಳಲ್ಲಿ **21–95** ಸರಪಳಿ ದೂರ ಚಲಿಸಿ ಕುಂತೂರು ಗ್ರಾಮದ ಸರ್ವೆ ನಂಬರ್ 267, 268 ಮತ್ತು 57ರ ಕೂಡುಬಾಂದಿನಿಂದ $191^0$ ಕೋನ 3–50 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 81ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 57, 268 ಮತ್ತು 256 ರಲ್ಲಿ ವಿವಿಧ ಕೋನಗಳಲ್ಲಿ **36–30** ಸರಪಳಿ ದೂರ ಚಲಿಸಿ ಸರ್ವೆ ನಂಬರ್ 248ರ ಪೂರ್ವಾಗ್ರ ಬಾಂದಿನಿಂದ $185^0$ ಕೋನ 5–10 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 87ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 256ರಲ್ಲಿ ವಿವಿಧ ಕೋನಗಳಲ್ಲಿ **20–00** ಸರಪಳಿ ದೂರ ಚಲಿಸಿ ಸರ್ವೆ ನಂಬರ್ 245 ಮತ್ತು 297ರ ಉತ್ತರ ದಿಕ್ಕಿನ ಕೂಡುಬಾಂದಿನಿಂದ $355^0$ ಕೋನ 0–50 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 92ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 256 ರಲ್ಲಿ ವಿವಿಧ ಕೋನಗಳಲ್ಲಿ **33–50** ಸರಪಳಿ ದೂರ ಚಲಿಸಿ ಸರ್ವೆ ನಂಬರ್ 227 ಮತ್ತು 229 ರ ಪಶ್ಚಿಮ ದಿಕ್ಕಿನ ಕೂಡುಬಾಂದಿನಿಂದ $315^0$ ಕೋನ 4–10 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 99ನ್ನು ಸೇರುತ್ತದೆ. ಮುಂದುವರೆದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 256ರಲ್ಲಿ ವಿವಿಧ ಕೋನಗಳಲ್ಲಿ **29–85** ಸರಪಳಿ ದೂರ ಚಲಿಸಿ ಕುಂತೂರು ಸರ್ವೆ ನಂಬರ್ 214 ಮತ್ತು 215ರ ಉತ್ತರ ದಿಕ್ಕಿನ ಕೂಡುಬಾಂದಿನಿಂದ $008^0$ ಕೋನ 2–40 ಸರಪಳಿ ದೂರದಲ್ಲಿ ಸ್ಥಾನ ಸಂಖ್ಯೆ 103ನ್ನು ಸೇರುತ್ತದೆ. ಮುಂದುವರಿದು ಸೀಮಾರೇಖೆಯು ಕುಂತೂರು ಸರ್ವೆ ನಂಬರ್ 256ರಲ್ಲಿ ವಿವಿಧ ಕೋನಗಳಲ್ಲಿ **27–95** ಸರಪಳಿ ದೂರ ಚಲಿಸಿ ಸ್ಥಾನ ಸಂಖ್ಯೆ 109ರ ಮುಖಾಂತರ ಪ್ರಾರಂಭಿಕ ಸ್ಥಾನ ಸಂಖ್ಯೆ 1ನ್ನು ಸೇರುತ್ತದೆ.

**ಪಶ್ಚಿಮದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುತ್ತದೆ.**

| ಸ್ಥಾನದಿಂದ | ಸ್ಥಾನಕ್ಕೆ | ಕೋನ ಡಿಗ್ರಿಗಳಲ್ಲಿ ಸೀಮಾರೇಖೆಯ ವಿವರಣೆ, ಸ್ಥಾನ ಸಂಖ್ಯೆಯ ವಿವರಣೆ | ಅಂತರ ಸರಪಳಿಗಳಲ್ಲಿ ಒಂದು ಸರಪಳಿ=ಒಂದು ನೂರು ಕೊಂಡಿಗಳು=ಇಪ್ಪತ್ತು ಮೀಟರ್ ಗಳು **ಸರಪಳಿ–ಕೊಂಡಿಗಳು** |
|---|---|---|---|
| 46 | 47 | $331^0$ | 9–30 |
| 47 | 48 | $028^0$ | 5–40 |
| 48 | 49 | $335^0$ | 2–60 |
| 49 | 50 | $010^0$ | 2–60 |
| | | | **19–90** |
| 50 | 51 | $144^0$ | 4–60 |
| 51 | 52 | $099^0$ | 2–50 |
| 52 | 53 | $102^0$ | 5–85 |
| 53 | 54 | $109^0$ | 7–05 |
| 54 | 55 | $013^0$ | 2–60 |
| 55 | 56 | $359^0$ | 6–35 |
| 56 | 57 | $042^0$ | 7–10 |
| 57 | 58 | $354^0$ | 5–80 |
| | | | **41–85** |
| 58 | 59 | $306^0$ | 6–90 |
| 59 | 60 | $226^0$ | 4–25 |
| 60 | 61 | $263^0$ | 3–50 |
| 61 | 62 | $308^0$ | 3–50 |
| 62 | 63 | $254^0$ | 13–10 |
| | | | **31–25** |
| 63 | 64 | $318^0$ | 4–20 |
| 64 | 65 | $280^0$ | 6–15 |
| 65 | 66 | $306^0$ | 6–20 |

